## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 472
2. ಸದಸ್ಯರ ಹೆಸರು : ಡಾ: ವೈ.ಎ.ನಾರಾಯಣಸ್ವಾಮಿ
3. ಉತ್ತರಿಸಬೇಕಾದ ದಿನಾಂಕ : 04.02.2021
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕೆ.ಸಿ ವ್ಯಾಲಿ ಯೋಜನೆ ಪ್ರಾರಂಭ ಆಗಿದ್ದು ಯಾವಾಗ; ಈ ಯೋಜನೆಯ ರೂಪುರೇಷೆಗಳೇನು: | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ 126 ಕೆರೆಗಳನ್ನು ತುಂಬಿಸಲು ರೂಪಿಸಲಾದ ಕೆ.ಸಿ ವ್ಯಾಲಿ ಯೋಜನೆಯು ದಿನಾಂಕ:06/02/2018 ರಂದು ಪ್ರಾರಂಭಗೊಂಡಿರುತ್ತದೆ.<br><br>ಬೆಂಗಳೂರು ನಗರದ ತ್ಯಾಜ್ಯ ನೀರನ್ನು ದ್ವಿತೀಯ ಹಂತಕ್ಕೆ ಸಂಸ್ಕರಿಸಿ ಕೋರಮಂಗಲ ಮತ್ತು ಚಲ್ಲಘಟ್ಟ ಎಸ್.ಟಿ.ಪಿ ಯಿಂದ 400 ಎಂ.ಎಲ್.ಡಿ ನೀರನ್ನು ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ಒಟ್ಟು 126 ಕೆರೆಗಳಿಗೆ ಏತ ನೀರಾವರಿ ಮೂಲಕ ತುಂಬಿಸುವುದಾಗಿರುತ್ತದೆ. ಸದರಿ ಯೋಜನೆಯಿಂದ 126 ಕೆರೆಗಳನ್ನು ಶೇ 50ರಷ್ಟು ಸಂಗ್ರಹಣಾ ಸಾಮರ್ಥ್ಯಕ್ಕೆ ತುಂಬಿಸಲು ಉದ್ದೇಶಿಸಲಾಗಿದೆ. ಇದರಿಂದ ಆ ಪ್ರದೇಶದಲ್ಲಿ ಅಂತರ್ಜಲ ಮಟ್ಟವನ್ನು ಅಭಿವೃದ್ಧಿ ಹೊಂದಿ ತೆರೆದಬಾವಿ ಹಾಗೂ ಕೊಳವೆ ಬಾವಿಗಳಲ್ಲಿ ನೀರು ಲಭ್ಯವಾಗಿ ಹಾಗೂ ಕೃಷಿ ಚಟುವಟಿಕೆಗಳಿಗೆ ಅನುಕೂಲ ವಾಗಲು ಸಹಕಾರಿಯಾಗಲಿದೆ. |
| ಆ | ಮೊದಲನೆಯ ಹಂತದ ಯೋಜನೆಗೆ ಬಿಡುಗಡೆಯಾದ ಅನುದಾನ ಎಷ್ಟು; | ಕೆ&ಸಿ ವ್ಯಾಲಿ ಮೊದಲನೆ ಹಂತದ ಯೋಜನೆಗೆ ಇಲ್ಲಿಯವರೆಗೆ ಒಟ್ಟು ರೂ.1323.08 ಕೋಟಿಗಳು ಹಣ ಬಿಡುಗಡೆ ಮಾಡಲಾಗಿರುತ್ತದೆ. |
| ಇ | ಎರಡನೇ ಹಂತದ ಯೋಜನೆಯನ್ನು ರೂಪಿಸಲು ಸರ್ಕಾರ ಚಿಂತಿಸಿದೆಯೇ: | ಕೆ&ಸಿ ವ್ಯಾಲಿ ಯೋಜನೆಯ ಎರಡನೇ ಹಂತದಲ್ಲಿ ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಒಟ್ಟು 257 ಕೆರೆಗಳನ್ನು ತುಂಬಿಸುವ ಕಾಮಗಾರಿಯನ್ನು ರೂ.455.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಕಾಮಗಾರಿಯು ಟೆಂಡರ್ ಪ್ರಕ್ರಿಯೆಯಲ್ಲಿದ್ದು, ಕಾಮಗಾರಿಯನ್ನು ಶೀಘ್ರವಾಗಿ ಪ್ರಾರಂಭಿಸಲಾಗುವುದು. |
| ಈ | ಎರಡನೇ ಯೋಜನೆ ಮುಖಾಂತರ ಇನ್ನುಳಿದ ಕೆರೆಗಳಿಗೆ ನೀರನ್ನು ತುಂಬಿಸಲು ಸರ್ಕಾರ ಯೋಚಿಸಿದೆಯೇ: | |
| ಉ | ಈ ಯೋಜನೆಗಾಗಿ ಸರ್ಕಾರ ಮೀಸಲಿಟ್ಟ ಹಣ ಎಷ್ಟು; ಈ ಯೋಜನೆಯನ್ನು ಯಾವಾಗ ಪ್ರಾರಂಭಿಸಲಾಗುವುದು? | |

ಕಡತ ಸಂಖ್ಯೆ: MID 03 LCQ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.